# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1292 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹೆಚ್.ಎಂ.ರಮೇಶ್ ಗೌಡ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 24.12.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ಮೆಟ್ರಿಕ್-ಪೂರ್ವ ಮತ್ತು ಮೆಟ್ರಿಕ್-ನಂತರದ ಹಾಸ್ಟೆಲ್ ಗಳ ಸಂಖ್ಯೆ ಎಷ್ಟು; ಮತ್ತು ಅವು ಯಾವುವು; ಹಾಗೂ ಸಾಮರ್ಥ್ಯವೆಷ್ಟು; ಸ್ವಂತ ಕಟ್ಟಡ ಹೊಂದಿರುವ ಹಾಸ್ಟೆಲ್ ಗಳೆಷ್ಟು; ಮತ್ತು ಬಾಡಿಗೆ ಕಟ್ಟಡಗಳಲ್ಲಿರುವ ಹಾಸ್ಟೆಲ್ ಗಳೆಷ್ಟು; (ತಾಲ್ಲೂಕುವಾರು ಮತ್ತು ಹಾಸ್ಟೆಲ್ ವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಪ್ರಸ್ತುತ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿ 1301 ಮೆಟ್ರಿಕ್-ಪೂರ್ವ ಹಾಗೂ 1137 ಮೆಟ್ರಿಕ್-ನಂತರದ ಹೀಗೆ ಒಟ್ಟು 2438 ವಿದ್ಯಾರ್ಥಿನಿಲಯಗಳು ಇದ್ದು, ಕ್ರಮವಾಗಿ 69956 ಮತ್ತು 127780 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶದ ಸೌಲಭ್ಯ ಇರುತ್ತದೆ.<br><br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ಒಟ್ಟು 2438 ವಿದ್ಯಾರ್ಥಿನಿಲಯಗಳ ಪೈಕಿ 1502 ವಿದ್ಯಾರ್ಥಿನಿಲಯಗಳು ಸ್ವಂತ ಕಟ್ಟಡಗಳಲ್ಲಿ, 134 ವಿದ್ಯಾರ್ಥಿನಿಲಯಗಳು ಉಚಿತ ಕಟ್ಟಡಗಳಲ್ಲಿ ಹಾಗೂ 802 ವಿದ್ಯಾರ್ಥಿನಿಲಯಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುತ್ತವೆ.<br><br>ತಾಲ್ಲೂಕುವಾರು ಮತ್ತು ವಿದ್ಯಾರ್ಥಿನಿಲಯವಾರು ವಿವರಗಳನ್ನು ಇಲಾಖೆಯ ಅಧಿಕೃತ ಜಾಲತಾಣ **http//www.bcwd.karnataka.gov.in** ನಲ್ಲಿ ನೀಡಲಾಗಿದೆ. |
| ಆ) | ರಾಜ್ಯದಲ್ಲಿ ಪ್ರತಿ ಹಾಸ್ಟೆಲ್ ಗೆ ಕಳೆದೆರಡು ವರ್ಷಗಳಿಂದ ದಾಖಲಾತಿ ಕೋರಿ ಸ್ವೀಕೃತವಾಗಿರುವ ಅರ್ಜಿಗಳೆಷ್ಟು; ಇದರಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ದಾಖಲಾತಿ ನೀಡಲಾಗಿದೆ; ಹಾಸ್ಟೆಲ್ ಸೀಟು ಪಡೆಯಲು ಸಾಧ್ಯವಾಗದ ವಿದ್ಯಾರ್ಥಿಗಳಿಗೆ ಸರ್ಕಾರವು ಕಲ್ಪಿಸಿರುವ ಸೌಲಭ್ಯಗಳೇನು; (ತಾಲ್ಲೂಕುವಾರು ಮತ್ತು ಹಾಸ್ಟೆಲ್ ವಾರು ಮಾಹಿತಿ ನೀಡುವುದು) | ಕಳೆದ ಎರಡು ವರ್ಷಗಳಲ್ಲಿ ವಿದ್ಯಾರ್ಥಿನಿಲಯಗಳ ಪ್ರವೇಶಕ್ಕೆ ಸ್ವೀಕೃತವಾಗಿರುವ ಹಾಗೂ ದಾಖಲಾತಿ ನೀಡಿರುವ ಅರ್ಜಿಗಳ ವಿವರಗಳನ್ನು ಇಲಾಖೆಯ ಅಧಿಕೃತ ಜಾಲತಾಣ **http//www.bcwd.karnataka.gov.in** ನಲ್ಲಿ ನೀಡಲಾಗಿದೆ.<br><br>ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸುವ ದೃಷ್ಟಿಯಿಂದ ಸರ್ಕಾರದ ಆದೇಶ ಸಂಖ್ಯೆ.ಬಿಸಿಡಬ್ಲ್ಯೂ 352 ಬಿಎಂಎಸ್ 2019, ದಿನಾಂಕ 21.1.2020 ಮತ್ತು ಸರ್ಕಾರದ ಆದೇಶ ಸಂಖ್ಯೆ ಬಿಸಿಡಬ್ಲ್ಯೂ 308 ಬಿಎಂಎಸ್ 2021 ದಿನಾಂಕ 16.7.2021ರಲ್ಲಿ ರಾಜ್ಯದ ವಿವಿಧ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಸಂಖ್ಯಾಬಲ ಹೆಚ್ಚಳ ಮಾಡಲಾಗಿರುತ್ತದೆ.<br><br>ಮುಂದುವರೆದು, ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಅರ್ಜಿ ಸಲ್ಲಿಸಿ ಪ್ರವೇಶ ದೊರಕದ ಅರ್ಹ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪರ್ಯಾಯವಾಗಿ ಅನುದಾನದ ಲಭ್ಯತೆಯನುಸಾರ ವಿದ್ಯಾಸಿರಿ ಯೋಜನೆಯಡಿ ಪ್ರತಿ ವಿದ್ಯಾರ್ಥಿಗೆ ಪ್ರತಿ ಮಾಹೆ ರೂ.1500/- ರಂತೆ ಗರಿಷ್ಠ 10 ತಿಂಗಳಿಗೆ ರೂ.15,000/- ಗಳನ್ನು ಮಂಜೂರು ಮಾಡಲಾಗುತ್ತದೆ. |

| | | |
|---|---|---|
| ಇ) | ಈ ಹಾಸ್ಟೆಲ್ ಗಳಲ್ಲಿ ವಿದ್ಯಾರ್ಥಿಗಳಿಗೆ ಕಲ್ಪಿಸಿರುವ ಸೌಲಭ್ಯಗಳೇನು; ಖಾಸಗಿ ಕಟ್ಟಡಗಳಲ್ಲಿರುವ ಹಾಸ್ಟೆಲ್ ಗಳ ಬದಲಿಗೆ ಸ್ವಂತ ಕಟ್ಟಡ ಹೊಂದಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾವತಿಯಿಂದ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳಲ್ಲಿನ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳ ವಿವರಗಳನ್ನು **ಅನುಬಂಧ-3ರಲ್ಲಿ** ನೀಡಲಾಗಿದೆ.<br><br>ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 802 ವಿದ್ಯಾರ್ಥಿನಿಲಯಗಳಿಗೆ ಪ್ರಸ್ತುತ 659 ವಿದ್ಯಾರ್ಥಿನಿಲಯಗಳಿಗೆ ನಿವೇಶನ ಲಭ್ಯವಿದ್ದು, 151 ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಕಾಮಗಾರಿಯು ಪ್ರಗತಿಯಲ್ಲಿರುತ್ತವೆ. ಪ್ರಸಕ್ತ ಸಾಲಿನಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ 24 ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಕೈಗೊಳ್ಳಲು ಅನುಮೋದನೆ ದೊರೆತಿರುತ್ತದೆ.<br><br>ಬಾಡಿಗೆ ಕಟ್ಟಡಗಳಲ್ಲಿರುವ ವಿದ್ಯಾರ್ಥಿನಿಲಯಗಳಿಗೆ ನಿವೇಶನ ಲಭ್ಯತೆ ಹಾಗೂ ಆಯಾ ಆರ್ಥಿಕ ವರ್ಷದಲ್ಲಿ ಒದಗಿಸಲಾಗಿರುವ ಅನುದಾನದ ಲಭ್ಯತೆಯನುಸಾರ ಹಂತ ಹಂತವಾಗಿ ಸ್ವಂತ ಕಟ್ಟಡ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲಾಗುವುದು. |

ಸಂಖ್ಯೆ: ಹಿಂವಕ 788 ಬಿಎಂಎಸ್ 2021

(ಕೋಟಾ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು